KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜನವರಿ ೧, ೨೦೦೯ (ಪುಷ್ಯ ೧೧, ಶಕ ವರ್ಷ ೧೯೩೦) | ಸಂಚಿಕೆ ೧ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಸಿಒ 171 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಧಾರವಾಡ ಜಿಲ್ಲೆ ನವಲಗುಂದ ತಾಲ್ಲೂಕಿನ ಶ್ರೀ ರೇಣುಕಾದೇವಿ ಗೋವಿನಜೋಳ ಸಂಸ್ಕರಣಾ ಸಹಕಾರಿ ಘಟಕ, ನವಲಗುಂದ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಯೋಗಪ್ಪ ಬೆಟಸೂರ, ಸಾ: ಮೊರಬ
2. ಶ್ರೀಮತಿ ಶಾರವ್ವ ಕೋಂ ಕಲ್ಲಪ್ಪ ಕರಗಿ ಸಾ:ಶಿರಕೋಳ
3. ಶ್ರೀ ಹನುಮಪ್ಪ ಗೋವಿಂದಪ್ಪ ಪೂಜಾರ (ವಡ್ಡರ) ತಾ:ತಿರ್ಲಾಪೂರ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 431

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಕಂದಾಯ ಸಚಿವಾಲಯ**

**ಅಧಿಸೂಚನೆ ಸಂಖ್ಯೆ:ಆರ್ ಡಿ 795 ಎಲ್ ಜಿಬಿ 2008, ದಿ:18ನೇ ಡಿಸೆಂಬರ್ 2008**

**ನಮೂನೆ–29 68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ದಿ:24.2.2004ರ

ಎಲ್‌ಎನ್‌ಡಿ/ಸಿಆರ್ 15/02–03ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಖರಾಬು ರಸ್ತೆ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಖರಾಬು ರಸ್ತೆ ಅಂಥ ಭಾಗದಲ್ಲಿನ ಅಥವಾ ಅದರ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ರಸ್ತೆಯ/ಬೀದಯ/ಗಲ್ಲಿಯ/ದಾರಿಯ ಭಾಗವು ಇರುವ ಗ್ರಾಮ | ಟಿ. ದಾಸರಹಳ್ಳಿ |
| ತಾಲ್ಲೂಕು | ಬೆಂಗಳೂರು ಉತ್ತರ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಭಾಗದ ವರ್ಣನೆ | ಸ.ನಂ. 42 ಮತ್ತು 45/1ರ ಮಧ್ಯದಲ್ಲಿ ಬರುವ ಗ್ರಾಮ ನಕಾಶೆಯಲ್ಲಿ ಕಂಡ 0.20 ಗುಂಟೆ ಖರಾಬು ರಸ್ತೆಯ ಜಮೀನು. |
| ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಸರಿಸುಮಾರು ವಿಸ್ತೀರ್ಣ | 0.28 ಗುಂಟೆ |
| ಮೇರೆಗಳು | ಪೂರ್ವಕ್ಕೆ :ಹೆಸರಘಟ್ಟ ರಸ್ತೆಗೆ ಹೊಂದಿಕೊಂಡಿರುವ ರಾಷ್ಟ್ರೀಯ ಹೆದ್ದಾರಿ ಸಂ:4 ಮತ್ತು ಸ.ನಂ. 45ರ ಜಮೀನು.<br>ಪಶ್ಚಿಮಕ್ಕೆ:ಸ.ನಂ. 42 ರ ಜಮೀನು<br>ಉತ್ತರಕ್ಕೆ: ಹೆಸರಘಟ್ಟ ರಸ್ತೆ ಮತ್ತು ಸ.ನಂ. 45/1 ರ ಜಮೀನು<br>ದಕ್ಷಿಣಕ್ಕೆ: ರೀ.ಸ.ನಂ. 40ರ ಜಮೀನು, ಸಾರ್ವಜನಿಕ ರಸ್ತೆಯ ಭಾಗ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಈಶ್ವರನಾಯಕ್**

ಪಿ.ಆರ್. 431

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ)

## ಕೃಷಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ:ಕೃತೋಇ 52 ಕೃಇಮಂ 2008, ಬೆಂಗಳೂರು, ದಿನಾಂಕ:18ನೇ ಡಿಸೆಂಬರ್ 2008**

ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಅಸೋಸಿಯೇಷನ್) ಅನುಚ್ಛೇದ 6 (ಎಫ್)ಮತ್ತು (ಜಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೆಳಕಂಡವರನ್ನು ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

| ಕ್ರ.ಸಂ | ಹೆಸರು | ಬೀಜ ಉತ್ಪಾದನಾ ಪ್ರತಿನಿಧಿಗಳು |
|---|---|---|
| 1 | ಶ್ರೀ ಎಸ್. ಚಂದ್ರಶೇಖರಪ್ಪ, ದಾವಣಗೆರೆ | ಪ್ರೆಸಿಡೆಂಟ್, ಕರ್ನಾಟಕ ರಾಜ್ಯ ಪ್ರಮಾಣಿತ ಬೀಜೋತ್ಪಾದಕರ ಫೋರಂ (ರಿ) |
| 2 | ಶ್ರೀ ಆರ್.ಜಿ. ಪರಮ ಶಿವಪ್ಪ,. ರಾಂಪುರ ದಾವಣಗೆರೆ | ಬೀಜ ಉತ್ಪಾದಕರು |
| 3 | ಶ್ರೀ ನಾರಾಯಣ ಪಿ. ಸಪಾರೆ, ಬಾಗಲಕೋಟೆ | ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಮಾಣಿತ ಬೀಜೋತ್ಪಾದಕರ ಫೋರಂ(ರಿ) |

| ಕ್ರ.ಸಂ | ಹೆಸರು | ರೈತ ಸಮುದಾಯ |
|---|---|---|
| 1 | ಶ್ರೀ ಸಿ.ಹೆಚ್. ಗೌಡ | ಪ್ರಗತಿಪರ ರೈತರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಗುರಾಣಿ**

ಪಿ.ಆರ್. 432

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಇಲಾಖೆ

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆರ್‌ಡಿ 448 ಎಎಸ್‌ಡಿ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಶ್ರೀ ಡಿ.ಪಿ. ಚವ್ಹಾಣ್, ತಹಶೀಲ್ದಾರ್ ಗ್ರೇಡ್–II ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಶ್ರೀ ಅಪ್ಪಾರಾವ್ ಪಾಟೀಲ್ ರವರಿಗೆ ಸರ್ಕಾರಿ ಅಧಿಸೂಚನೆ ಸಂ:ಕಂಇ 32 ಎಎಸ್ ಜಿ 2000, ದಿನಾಂಕ:4.12.2000ರಲ್ಲಿ ತಹಶೀಲ್ದಾರ್ ಗ್ರೇಡ್– II ವೃಂದಕ್ಕೆ ದಿನಾಂಕ:24.9.1997 ರಿಂದ ಪೂರ್ವಾನ್ವಯವಾಗಿ ಬಡ್ತಿ ನೀಡಿರುವುದರಿಂದ ಶ್ರೀ ಡಿ.ಪಿ. ಚವ್ಹಾಣ್. ಇವರಿಗೂ ಕೂಡ ದಿನಾಂಕ:24.9.1997 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್– II ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿ ನೀಡಲಾಗಿದೆ. ಹಾಗೂ ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ 34 ಎಎಸ್‌ಡಿ 2003, ದಿನಾಂಕ:24.11.2007ರಲ್ಲಿ ಶ್ರೀಯುತ ಅಪ್ಪಾರಾವ್‌ಪಾಟೀಲ್ ರವರಿಗೆ ತಹಶೀಲ್ದಾರ್ ಗ್ರೇಡ್– I ವೃಂದಕ್ಕೆ ದಿನಾಂಕ:4.1.2001 ರಿಂದ ಬಡ್ತಿಯನ್ನು ಸಕ್ರಮಗೊಳಿಸಿರುವುದರಿಂದ, ಶ್ರೀ ಡಿ.ಪಿ. ಚವ್ಹಾಣ್ ಇವರಿಗೂ ಕೂಡ ದಿನಾಂಕ:4.1.2001 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್– I ವೃಂದಕ್ಕೆ ಪೂರ್ವಾನ್ವಯವಾಗಿ ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿಪಿ) ನಿಯಮಾವಳಿಗಳು 1978ರ ನಿಯಮ 2(3)ರ ಪ್ರಕಾರ ಬಡ್ತಿಯನ್ನು ಸಕ್ರಮಗೊಳಿಸಿ ಆದೇಶಿಸಿದೆ.

ಈ ಹಿಂದೆ ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ 72 ಎಎಸ್‌ಡಿ 2008, ದಿನಾಂಕ:16.9.2008ರ ಅಧಿಸೂಚನೆಯನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ಚೌಕಿಮಠ**

ಪಿ.ಆರ್. 433

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂ: ಸಇ 274 ಎಂಆರ್‌ಇ 2008, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್ 2008.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹಾವೇರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ರುದ್ರಪ್ಪ ಚನ್ನಬಸಪ್ಪ<br>ಆಲದಕಟ್ಟೆ, ಹಾವೇರಿ |
| 2 | ಶ್ರೀ ಸೋಮಣ್ಣ ಚನ್ನಬಸಪ್ಪ ದೊಡ್ಡಮನಿ<br>ಬಸಾಪೂರ, ಹಾವೇರಿ |
| 3 | ಶ್ರೀ ಚನ್ನಬಸಣ್ಣ ಕೋಡಳ್ಳಿ<br>ಹಳೆರಿತ್ತಿ, ಹಾವೇರಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವಮೂರ್ತಿ**

ಪಿ.ಆರ್. 435

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ಅಧಿಸೂಚನೆ**

**ಸಂ: ಸಇ 307 ಎಂಆರ್‌ಇ 2008, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್ 2008.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ತಾಳಿಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ಬಾಪುಗೌಡ, ಸಂಗನಗೌಡ<br>ಬಿರಾದಾರ, ಸಾ:ಢವಳಗಿ |
| 2 | ಶ್ರೀ ಖಾನಗೌಡ ಶಿವನಗೌಡ ಪಾಟೀಲ<br>ಸಾ: ಮುದುರ |

| | |
|---|---|
| 3 | ಶ್ರೀ ನಾಗೇಶ ಲೋಕಪ್ಪ ಜಾದವ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಕೆ. ವಾಸುದೇವಮೂರ್ತಿ**
ಪಿ.ಆರ್. 436 ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

**ಅಧಿಸೂಚನೆ**

**ಸಂ: ಸಇ 319 ಎಂಆರ್‌ಇ 2008, ಬೆಂಗಳೂರು, ದಿನಾಂಕ:5ನೇ ಡಿಸೆಂಬರ್ 2008.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ರೋಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ರವಿ ವೀರಪ್ಪ ಸಜ್ಜನರ<br>ಸಾ: ಮುಶಿಗೇರಿ ತಾ:ರೋಣ |
| 2 | ಶ್ರೀಮತಿ ಕಸ್ತೂರವ್ವ ಕೋಂ ಬಸವರಾಜ ಕಮ್ಮಾರ<br>ಸಾ: ಅಬ್ಬಿಗೇರಿ, ತಾ:ರೋಣ |
| 3 | ಶ್ರೀ ನಿಂಗಪ್ಪ, ಸಿದ್ದರಾಮಪ್ಪಾ, ಮದ್ನಾಳ,<br>ಸಾ:ಹೊಳೆಆಲೂರು, ತಾ:ರೋಣ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಕೆ. ವಾಸುದೇವಮೂರ್ತಿ**
ಪಿ.ಆರ್. 437 ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

**ಅಧಿಸೂಚನೆ**

**ಸಂ: ಸಇ 322 ಎಂಆರ್‌ಇ 2008, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್ 2008.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸೇಡಂ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ಗೋಪಾಲ ರೆಡ್ಡಿ ಬಿನ್ ಮಾಲರೆಡ್ಡಿ ಪಾಟೀಲ್<br>ಗುವನಹಳ್ಳಿ, ಸೇಡಂ ತಾಲ್ಲೂಕು |
| 2 | ಶ್ರೀಮತಿ ಗಂಗಾದೇವಿ ಕೋಂ ಬಸವರಾಜ ನಿಷ್ಠಿ,<br>ಹಳೆ ಗಂಜಿ ರಸ್ತೆ, ಸೇಡಂ ತಾಲ್ಲೂಕು |
| 3 | ಶ್ರೀ ರಾಮೂನಾಯಕ್ ಬಿನ್ ಲಚ್ಚಣ್ಣ ನಾಯಕ<br>ಇಟ್ಕಲ್ ತಾಂಡ ಮತ್ತು ಅಂಚೆ, ಸೇಡಂ ತಾಲ್ಲೂಕು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಕೆ. ವಾಸುದೇವಮೂರ್ತಿ**
ಪಿ.ಆರ್. 438 ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

**ಅಧಿಸೂಚನೆ**

**ಸಂ: ಸಇ 323 ಎಂಆರ್‌ಇ 2008, ಬೆಂಗಳೂರು, ದಿನಾಂಕ:12ನೇ ಡಿಸೆಂಬರ್ 2008.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೀದರ್, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ಬಾಬುರಾವ್ ಬಿನ್ ಹನುಮಂತರಾವ್<br>ಬಿರಾದಾರ್ ಸಾಂಗ್ವಿ ತಾಲ್ಲೂಕು, ಬೀದರ್ ಜಿಲ್ಲೆ |

| | |
|---|---|
| 2 | ಶ್ರೀಮತಿ ರತಿದೇವಿ ಕೋಂ ರಾಜಕುಮಾರ ಘಂಟೆ,<br>ನಂ. 19–3–69/1, ಭವಾನಿ ಕಾಲೋನಿ, ಶಿವನಗರ(ದಕ್ಷಿಣ) ಬೀದರ್ |
| 3 | ಶ್ರೀ ಕಲವ್ವಾ ಅರ್ಜುನ್ ಶಿವಗೊಂಡ<br>ಬೆನಕನಹಳ್ಳಿ ಗ್ರಾಮ ಬೀದರ್ ತಾಲ್ಲೂಕು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವಮೂರ್ತಿ**

ಪಿ.ಆರ್. 439 ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಸಿಒ 150 ಸಿಎನ್ಎಸ್ 2008, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್ 2008**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಬಿ.ಜಿ. ಬಸವರಾಜಪ್ಪ ಬಿನ್ ಗೌಡ್ರು ಬಸಪ್ಪ, ಎಂ. ಹನುಮನಹಳ್ಳಿ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರನ್ನು ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 440 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಸಿಒ 169 ಸಿಎನ್ಎಸ್ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿಕ್ಕಬಳ್ಳಾಪುರ ಜಿಲ್ಲೆ ಗುಡಿಬಂಡೆ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮತ್ತು ಬಾಗೇಪಲ್ಲಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಗುಡಿಬಂಡೆ ಇವುಗಳ ಆಡಳಿತ ಮಂಡಳಿಗಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**ಗುಡಿಬಂಡೆ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.**

1. ಶ್ರೀ ಮುನಿಸ್ವಾಮಿ ರೆಡ್ಡಿ ಎನ್. ಬಿನ್ ನಾರಪ್ಪ ಅಂಚೆ, ಕಛೇರಿ ಹಿಂಭಾಗ, ಗುಡಿಬಂಡೆ
2. ಶ್ರೀನಾಥ್ ಬಿನ್ ವೆಂಕಟಸ್ವಾಮಿ, ಬೀಚಗಾನಹಳ್ಳಿ, ಗುಡಿಬಂಡೆ ತಾಲ್ಲೂಕು
3. ಶ್ರೀಮತಿ ಸುಖನ್ಯ ಕೋಂ ಸತೀಶರೆಡ್ಡಿ, ಕೊಪ್ಪಕಾಟೇನಹಳ್ಳಿ, ಸೋಮನಹಳ್ಳಿ ಹೋಬಳಿ, ಗುಡಿಬಂಡೆ ತಾ:

**ಗುಡಿಬಂಡೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.**

1. ಶ್ರೀ ವೈ.ಎ. ಹನುಮಂತರೆಡ್ಡಿ ಬಿನ್ ಆಂಜನಪ್ಪ, ಯಲಕರಾಳ್ಳಹಳ್ಳಿ, ಗುಡಿಬಂಡೆ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 441 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಸಿಒ 170 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮತ್ತು ಬಾಗೇಪಲ್ಲಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಬಾಗೇಪಲ್ಲಿ ಇವುಗಳ ಆಡಳಿತ ಮಂಡಳಿಗಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**ಬಾಗೇಪಲ್ಲಿ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.**

1. ಶ್ರೀ ಆನಂದರೆಡ್ಡಿ ಬಿನ್ ಯರ್ರಪ್ಪ, ಒಡಗಿರಿ ಜೂಲಪಾಳ್ಯ, ಮಿಟ್ಟೇಮರಿ ಹೋಬಳಿ, ಬಾಗೇಪಲ್ಲಿ ತಾ:
2. ಶ್ರೀ ನರಸಿಂಹ ಹೆಚ್. ಬಿನ್ ಹನುಮಂತಪ್ಪ ಚಾಕವೇಲು, ಚೇಳೂರು ಹೋಬಳಿ, ಬಾಗೇಪಲ್ಲಿ ತಾ:
3. ಶ್ರೀಮತಿ ಸಂಧ್ಯಾ ಕೋಂ ಮಂಜುನಾಥ ರೆಡ್ಡಿ, ವೆಂಕಟಾಪುರ, ಚೇಳೂರು ಹೋಬಳಿ, ಬಾಗೇಪಲ್ಲಿ ತಾ:

**ಬಾಗೇಪಲ್ಲಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.**

1. ಶ್ರೀ ನಾಗಭೂಷಣ ಬಿನ್ ಕೃಷ್ಣಯ್ಯ ಶೆಟ್ಟಿ, ರಾಚ್ಚೆರುವು, ಚೇಳೂರು ಹೋಬಳಿ ಬಾಗೇಪಲ್ಲಿ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 442

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಸಿಒ 162 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಸೇಡಂ, ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ರಮೇಶ್ ಬಿನ್ ಶಿವಯೋಗಿ ಮುದ್ದಾಣಿ ಹಾಬಾಳ, ಟಿ. ಸೇಡಂ
2. ಶ್ರೀಮತಿ ಸಾವಿತ್ರಿ ಕೋಂ ಸಂಜಯ್ ಪಾಟೀಲ್, ತರನಹಳ್ಳಿ, ಹಲಕರಟಿ ಗಲ್ಲಿ, ಸೇಡಂ, ತಾ:
3. ಶ್ರೀ ಶಂಭುಲಿಂಗ ಬಿನ್ ಶಿವಪ್ಪ ನಾಟಿಕರ್ ಬಸವನಗರ, ಸೇಡಂ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 443

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಅಧಿಸೂಚನೆ ಸಂ: ಸಇ 275 ಎಂಆರ್‌ಇ 2008, ಬೆಂಗಳೂರು, ದಿನಾಂಕ:19ನೇ ಡಿಸೆಂಬರ್ 2008.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚನ್ನಗಿರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ಎಲ್. ಚಂದ್ರನಾಯ್ಕ ತಂದೆ ಸೌಮ್ಯನಾಯ್ಕ<br>ಕೆಂಗಪುರ–ಗ್ರಾಮ, ಕಣಿವೆಬಿಳಚಿ–ಅಂಚೆ,<br>ಚನ್ನಗಿರಿ ತಾಲ್ಲೂಕು |

| | |
|---|---|
| 2 | ಶ್ರೀ ರೇವಣ ಸಿದ್ದಪ್ಪ ತಂದೆ ದುಳಿಸಿದ್ದಪ್ಪ<br>ಕರೇಕಟ್ಟೆ ಗ್ರಾಮ ಮತ್ತು ಅಂಚೆ,<br>ಚನ್ನಗಿರಿ ತಾಲ್ಲೂಕು |
| 3 | ಶ್ರೀ ಡಿ.ಎಸ್. ವಿಜಯಕುಮಾರ್ ಬಿನ್ ಸಿದ್ದಲಿಂಗಪ್ಪ<br>ದಿಗ್ಗೇನಹಳ್ಳಿ ಗ್ರಾಮ & ಅಂಚೆ, ಚನ್ನಗಿರಿ ತಾಲ್ಲೂಕು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವಮೂರ್ತಿ**

ಪಿ.ಆರ್. 444

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**HOME SECRETARIAT**

**NOTIFICATION**

**No: HD 665 SST 2008, Bangalore, Dated: 22nd December 2008**

In exercise of the powers conferred by Section 21 of the Code of Criminal Procedure, 1973 (Central Act II of 1974) the Government of Karnataka hereby appoints the officers specified in column (2) of the table below as Exceutive Magistrates for the area specified in column (3) of the table and confer on them all the powers as are conferrable on Executive Magistrates under the said code for the period from 25.12.2008 to 29.12.2008 (both days inclusive) in order to maintain Law and Order in the 07-HUKKERI AND 08-ARABHAVI ASSEMBLY CONSTITUENCIES in view of observance of "BYE-ELECTION-2008"

| Sl No. | Name & Designation of the Officers | Area of Juridiction |
|---|---|---|
| 1 | 2 | 3 |
| 1 | 1) Shri Preetam Nasalapur, Prob. Tahsildar<br>2) Shri Shahivappa Lamani, Prob. Tahsildar | 7-Hukkeri Assembly Constituency |
| 2 | 1) Shri R.T.Jangal, Ex,Engineer,KNNN Sub Dn, 5 AEE Kaujalagi Tq.Gokak.<br>2) Shri A.N. Pujar,Commissioner, CMC Gokak. | 8-Arabhavi Assembly Constituency |

By order and in the name of the Governor of Karnataka

**K.C. SIDDAPPA**

PR. 445

Under Secretary to Government

Home Department (Law and Order)

**NOTIFICATION**

**No: HD 08 PCE 2008, Bangalore, Dated: 19th September 2008**

Whereas the Government of Karnataka is of the opinion that it is necessary to appoint a Commission of Inquiry to inquire in to the incidents of attack on certain places of worship in Dakshina Kannada and other districts of Karnataka in the month of September 2008.

2. Now, therefore, in exercise of the powers conferred by sub-section (1) of section 3 of the Commissions of Inquiry Act 1952 (Central Act LX of 1952 hereinafter referred to as the said Act), the Government of Karnataka hereby appoints Hon'ble Mr. Justice B.K. Somashekara, Retired Judge of the High Court of Karnataka and Andhra Pradesh as a one man Commission of Inquiry.

3. The terms of reference of the Commission shall be as follows.

i) To inquire into the sequence of events and circumstances leading to attack on the places of worship and incidents thereafter which accured during the month of September 2008 in Dakshina Kannada and other districts of Karnataka.

ii) To identify persons and organizations responsible for the above incidents.

iii) To ascertain whether there was any negligence or lapses on the part of district administration in dealing with the situation and

iv) Any other matter which arises from or is connected with or incidental to any act or omission relating to the said incidents, including steps and measures to be taken to prevent recurrence of such events in future.

4. Under Sub-section (1) of section 5 of the said Act, the Government of Karnataka hereby directs that the provision of sub-sections (2),(3),(4) and (5) of the said section shall apply to the Commission.

5. The Commission shall complete the inquiry and give its report within a period of three months.

6. The Commission shall have its headquarters in Bangalore and have its sittings at such places as it deems necessary.

By order and in the name of the Governor of Karnataka

**L. SHANMUKHA**

Deputy Secretary to Government

Home Department (Law and Order)

PR. 446

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂ: ಸಾರಿಇ 108 ವಾಈಸೇ 2008, ಬೆಂಗಳೂರು, ದಿನಾಂಕ:19ನೇ ಡಿಸೆಂಬರ್ 2008.**

ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ ನ Article of Association ನ 8 ಮತ್ತು 17ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಾಣಿಸಿರುವ ಅಧಿಕಾರಿಗಳನ್ನು ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ ನಿಯಮಿತದ ನಿರ್ದೇಶಕರ ಮಂಡಳಿಯಲ್ಲಿ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| | |
|---|---|
| 1 | ಶ್ರೀ ಎನ್. ಲಕ್ಷ್ಮೀನಾರಾಯಣ,ಭಾ.ಆ.ಸೇ, ಮುಖ್ಯಮಂತ್ರಿಗಳ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು |
| 2 | ಶ್ರೀ ಭಾಸ್ಕರರಾವ್, ಭಾ.ಪೋ.ಸೇ., ಸಾರಿಗೆ ಆಯುಕ್ತರು, ಬೆಂಗಳೂರು. |
| 3 | ಶ್ರೀ ಎಸ್.ಎನ್. ಗೌರಿಶಂಕರ್, ಕ.ಆ.ಸೇ., ಉಪ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ಪ್ರಸಾದ್**

ಸರ್ಕಾರದ ಉಪ ಕಾರ್ಯದರ್ಶಿ,

ಸಾರಿಗೆ ಇಲಾಖೆ

ಪಿ.ಆರ್. 447

**FINANCE SECRETARIAT**

**NOTIFICATION**

**No:FD 34 TAR 2008, Bangalore, Dated: 15th December 2008**

In exercise of the powers conferred by Clause (3) of Article 166 of the Constitution of India, the Governor of Karnataka is pleased to make the following rules further to amend "The Government of Karnataka (Consultation with Financial Adviser) Rules 1982 namely:

**Title and Commencement: :** (1) These rules may be called "The Government of Karnataka (Consultation with Financial Adviser) (First Amendment) Rules, 2008.

(2) It shall come in to force with immediate effect.

**Amendment to Rule 3 of "The Government of Karnataka Consultation with Financial Adviser) Rules.**

The following paras may be added as (iii), (iv) and (v) below existing paras.

(iii) Whenever an Internal Financial Adviser is to be posted to a Department of Secretariat, the Department of Personnel and Administrative Reforms will place the services of the Internal Financial Adviser at the disposal of the Finance Department for issue of reposting orders to a Department as determined by the Finance Department. Generally, officers who have worked earlier in the Finance Department are to be posted as Internal Financial Advisers (other than State Accounts Department and Accountant General's Office).

(iv) The Internal Financial Advisers mau be sanctioned leave other than Casual Leave by the Department of Personnel & Administrative Reforms on the recommendation of the Finance Department.

(v) The Principal Secretary to Government, Finance Department will be the reviewing authority of Annual Performance Reports of the Internal Financial Advisers.

**Amendment to Rule 14 of "The Government of Karnataka (Consultation with Financial Adviser) Rules.**

The existing provision under para (ii) of Rule 14 may be deleted and substituted by the following:

(ii) In respect of proposals which are not agreed to by the Internal Financial Advisers, it will be mandatory for the Administrative Departments to obtain the concurrence of Finance Department in such cases.

By order and in the name of the Governor of Karnataka

**C. SHAMA RAO**

PR. 448

Under Secretary to Government (FR & BCC)

Finance Department

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 132 ಎಂಎನ್‌ಜಿ 2006, ಬೆಂಗಳೂರು, ದಿನಾಂಕ 18ನೇ ಡಿಸೆಂಬರ್ 2008.**

ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) 421ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ರಚಿಸಲು ಉದ್ದೇಶಿಸಿರುವ ಕರ್ನಾಟಕ ಪೌರ ನಿಗಮಗಳ (ಬೀದಿಗಳು, ವೃತ್ತಗಳು, ಚೌಕಗಳು, ಪಾರ್ಕುಗಳು, ಉದ್ಯಾನಗಳು ಅಥವಾ ಯಾವುದೇ ಇತರ ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದು) ನಿಯಮಗಳು, 2008ರ ಕರಡನ್ನು, ಸದರಿ ಅಧಿನಿಯಮದ 421ನೇ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ಅಗತ್ಯಪಡಿಸಲಾದಂತೆ ಈ ಮೂಲಕ, ಇದರಿಂದ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಸದರಿ ಕರಡಿನ ಸಂಬಂಧದಲ್ಲಿ, ಮೇಲೆ ಹೇಳಿದ ಅವಧಿ ಮುಕ್ತಾಯವಾಗುವುದಕ್ಕಿಂತ ಮೊದಲು ಯಾರೇ ವ್ಯಕ್ತಿಯಿಂದ ರಾಜ್ಯ ಸರ್ಕಾರಕ್ಕೆ ಬಂದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, 4ನೇ ಮಹಡಿ, ವಿಕಾಸಸೌಧ, ಡಾ॥ ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು – 560001 ಇವರಿಗೆ ಸಲ್ಲಿಸಬಹುದಾಗಿದೆ.

**ಕರಡು ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ.**– (1)ಈ ನಿಯಮಗಳನ್ನು ಕರ್ನಾಟಕ ಪೌರ ನಿಗಮಗಳ (ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದು) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು.**– ಈ ನಿಯಮಗಳಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ,–

(ಎ) "ಅಧಿನಿಯಮ" ಎಂದರೆ, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14);

(ಬಿ) "ನಮೂನೆ" ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ;

(ಸಿ) "ಮೇಯರ್" ಎಂದರೆ ನಗರಪಾಲಿಕೆ ಅಥವಾ ವಿಶಾಲ ನಗರ ಪ್ರದೇಶದ ಮೇಯರ್;

(ಡಿ) "ಸಾರ್ವಜನಿಕ ಸ್ಥಳ" ಎಂದರೆ ನಗರ ಪಾಲಿಕೆಗೆ ಸೇರಿದ ಅಥವಾ ಈ ಅಧಿನಿಯಮದ ಬಲದ ಮೂಲಕ ಅದರಲ್ಲಿ ನಿಹಿತವಾಗಿರುವಂಥ ಯಾವುದೇ ಬೀದಿ, ವೃತ್ತ, ಚೌಕ, ಪಾರ್ಕು, ಆಟದ ಮೈದಾನ, ಉದ್ಯಾನ ಅಥವಾ ಯಾವುದೇ ಇತರ ಸಾರ್ವಜನಿಕ ಸ್ಥಳ ಮತ್ತು ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಯಾವುದೇ ಇತರ ಸ್ಥಳವನ್ನು ಒಳಗೊಳ್ಳುತ್ತದೆ;

(ಇ) "ಪ್ರಕರಣ" ಎಂದರೆ, ಅಧಿನಿಯಮದ ಒಂದು ಪ್ರಕರಣ.

3. **ರಿಜಿಸ್ಟರನ್ನು ನಿರ್ವಹಿಸುವುದು.–** ಪ್ರತಿಯೊಂದು ನಿಗಮವು, ಸಾರ್ವಜನಿಕ ಸ್ಥಳಗಳ ಪ್ರತಿಯೊಂದು ವರ್ಗಕ್ಕೆ ಸಂಬಂಧಿಸಿದಂತೆ, ನಮೂನೆ–1ರಲ್ಲಿ ಹೇಳಿರುವ ವಿವರಣೆಗಳನ್ನು ಒಳಗೊಂಡಿರುವ ಒಂದು ಪ್ರತ್ಯೇಕವಾದ ರಿಜಿಸ್ಟರನ್ನು ನಿರ್ವಹಿಸತಕ್ಕದ್ದು. ಅಂಥ ರಿಜಿಸ್ಟರ್‌ನಲ್ಲಿ ಒಳಗೊಂಡಿರುವ ವಿಷಯಗಳನ್ನು, ಸಾಂಕೇತಿಕ ಶುಲ್ಕಗಳನ್ನು ಸಂದಾಯ ಮಾಡಿದ ಮೇಲೆ ಸಾರ್ವಜನಿಕರಿಗೆ ದೊರೆಯುವಂತೆ ಮಾಡತಕ್ಕದ್ದು.

4. **ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದರ ಉದ್ದೇಶ.–** ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದರ ಪ್ರಧಾನ ಉದ್ದೇಶವೆಂದರೆ, ಸುಸಂಗತ ವಿಳಾಸ ವ್ಯವಸ್ಥೆಯನ್ನು ಮಾಡುವುದು ಮತ್ತು ಬಟವಾಡೆ ಸೇವಾ ವ್ಯವಸ್ಥೆಯಲ್ಲಿ ದಕ್ಷತೆಯನ್ನು ಹೆಚ್ಚಿಸುವುದು ಮತ್ತು ಸಮನ್ವಯಗೊಳಿಸುವುದಾಗಿರುತ್ತದೆ. ಇತರ ಪ್ರಮುಖ ಉದ್ದೇಶಗಳೆಂದರೆ,–

(ಎ) ಅಂಚೆ ಬಟವಾಡೆ ಮತ್ತು ಸೇವಾ ವ್ಯವಸ್ಥೆಯನ್ನು ಸುಧಾರಿಸುವ ಮೂಲಕ ನಿವಾಸಿಗಳ ಜೀವನಮಟ್ಟ ಸುಧಾರಿಸುವುದು;

(ಬಿ) ಆಸ್ತಿ ತೆರಿಗೆಯ ಸೂಕ್ತ ನಿರ್ವಹಣೆ, ವಾರ್ಡ್ ಕಾಮಗಾರಿಗಳು ಮತ್ತು ಅಗತ್ಯ ಮೂಲ ಸೌಕರ್ಯಗಳನ್ನು ಒದಗಿಸುವಲ್ಲಿ ಸ್ಥಳೀಯ ಸಂಸ್ಥೆಗಳಿಗೆ ನೆರವಾಗುವುದು;

(ಸಿ) ನಿವಾಸಿಗಳ ಮತ್ತು ಕಾರ್ಯಸಂಸ್ಥೆಗಳ ವಿಳಾಸ ಸ್ಥಳಗಳನ್ನು ಹೆಚ್ಚು ಸರಳಗೊಳಿಸುವುದು;

(ಡಿ) ಪ್ರಖ್ಯಾತ ವ್ಯಕ್ತಿಗಳು ಸಲ್ಲಿಸಿರುವ ಸಾರ್ವಜನಿಕ ಸೇವೆಗೆ ಮನ್ನಣೆ ನೀಡಿ ಸ್ಮರಿಸಿಕೊಳ್ಳುವಂತೆ ಮಾಡುವುದು.

5. **ಸಾರ್ವಜನಿಕ ಸ್ಥಳದ ನಾಮಕರಣ ಮಾಡುವ ಪದ್ಧತಿ.–** ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವಾಗ ವಿಶಿಷ್ಟ ವ್ಯಕ್ತಿಯ ಹೆಸರುಗಳನ್ನು ಬಳಸತಕ್ಕದ್ದು. ಈ ಹೆಸರುಗಳನ್ನು, ಸಾರ್ವಜನಿಕ ಸೇವೆ, ಸಾಹಿತ್ಯ, ಕಲೆ, ಶಿಕ್ಷಣ, ಕ್ರೀಡೆಗಳ ಕ್ಷೇತ್ರದಲ್ಲಿ ಬಹುತೇಕ ಆ ಪ್ರದೇಶದವರೇ ಆಗಿರುವ, ಗಣನೀಯ ಸೇವೆ ಸಲ್ಲಿಸಿರುವ ಪ್ರಮುಖ ವ್ಯಕ್ತಿಗಳ ಹೆಸರುಗಳಿಂದ ಅಥವಾ ಐತಿಹಾಸಿಕ ಪ್ರಾಮುಖ್ಯತೆಯುಳ್ಳ ವ್ಯಕ್ತಿಗಳು ಅಥವಾ ಘಟನೆಗಳಿಂದ ಸುದೀರ್ಘ ಕಾಲದಿಂದ ಜನಪ್ರಿಯವಾಗಿ ಬಳಕೆಯಲ್ಲಿದ್ದು ಆ ಪ್ರದೇಶದಲ್ಲಿ ಸಹಜವಾಗಿ ಪರಿಚಿತವಾಗಿರುವ ಹೆಸರುಗಳಿಂದ ಆಯ್ಕೆ ಮಾಡಿಕೊಳ್ಳತಕ್ಕದ್ದು.

6. **ರಸ್ತೆಗಳಿಗೆ ನಾಮಕರಣ ಮಾಡುವ ರೂಢಿ.–** ಬೀದಿಯ ಹೆಸರು ಎಂಬುದು ಎರಡು ಭಾಗಗಳನ್ನು ಒಳಗೊಂಡಿರತಕ್ಕದ್ದು, ಮೊದಲನೆಯದು ಹೆಸರು ಮತ್ತು ಎರಡನೆಯದು ಮಾದರಿ. ಎರಡನೆಯದು ರಸ್ತೆಯ ಮುಖ್ಯ ಭಾಗವನ್ನು ಮಾತ್ರ ಸೂಚಿಸತಕ್ಕದ್ದು. ಪ್ರಮುಖ ರಸ್ತೆಗಳಿಗೆ ನಾಮಕರಣ ಮಾಡುವುದಕ್ಕಾಗಿ 5ನೇ ನಿಯಮದಲ್ಲಿ ಹೇಳಿರುವ ಅಂಕಿತ ನಾಮಗಳನ್ನು ಉಪಯೋಗಿಸತಕ್ಕದ್ದು. ಸಂಖ್ಯೆಗಳು ಅಂಕಿತನಾಮಗಳಾಗಿಲ್ಲದಿರುವುದರಿಂದ ಅವುಗಳನ್ನು ಒಳರಸ್ತೆಗಳು ಮತ್ತು ಅಡ್ಡರಸ್ತೆಗಳಿಗೆ ಹೆಸರುಗಳಿಗಾಗಿ ಉಪಯೋಗಿಸತಕ್ಕದ್ದು.

7. **ರಸ್ತೆಗಳ ಹೆಸರುಗಳಲ್ಲಿ ಪುನರಾವರ್ತನೆ ಇರಬಾರದು.–** ಸಾಮಾನ್ಯವಾಗಿ ಒಂದು ನಗರ ಪಾಲಿಕೆಯ ಪ್ರದೇಶದೊಳಗಿನ ಯಾವುವೇ ಎರಡು ಬೀದಿಗಳು, ವೃತ್ತಗಳು, ಚೌಕಗಳು, ಪಾರ್ಕ್‌ಗಳು, ಉದ್ಯಾನಗಳು, ಯಾವುದೇ ಇತರ ಸಾರ್ವಜನಿಕ ಸ್ಥಳಗಳು, ಒಂದೇ ರೀತಿಯ ಹೆಸರನ್ನು ಹೊಂದಿರತಕ್ಕದ್ದಲ್ಲ.

8. **ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವಾಗ ಅನುಸರಿಸಬೇಕಾದ ಕಾರ್ಯ ವಿಧಾನ.–** ಅಧಿನಿಯಮದ 293ನೇ ಪ್ರಕರಣದ (1)ನೇ ಉಪ ಪ್ರಕರಣದ ಅನುಸಾರ ಯಾವುದೇ ಸಾರ್ವಜನಿಕ ಸ್ಥಳಕ್ಕೆ ಹೆಸರಿಡುವುದಕ್ಕೆ ಸಂಬಂಧಿಸಿದಂತೆ, ನಗರಪಾಲಿಕೆ ಅಭಿಪ್ರಾಯಪಟ್ಟರೆ ಅಥವಾ ಅದು, ಯಾರೇ ವ್ಯಕ್ತಿಯಿಂದ ಪ್ರಸ್ತಾವ ಸ್ವೀಕರಿಸಿದರೆ, ನಗರಪಾಲಿಕೆಯು ಈ ಮುಂದೆ ಹೇಳಿರುವ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ನಾಮಕರಣ ಮಾಡತಕ್ಕದ್ದು. ನಾಮಕರಣ ಮಾಡುವುದಕ್ಕೆ ಸಂಬಂಧಿಸಿದ ಪ್ರತಿಯೊಂದು ಪ್ರಸ್ತಾವವನ್ನು, ಸಂಬಂಧಪಟ್ಟ ಸ್ಥಾಯೀ ಸಮಿತಿಯು 5,6 ಮತ್ತು 7ನೇ ನಿಯಮಗಳ ಉಪಬಂಧಗಳ ದೃಷ್ಟಿಯಿಂದ ಪರಿಶೀಲಿಸತಕ್ಕದ್ದು ಮತ್ತು ನಗರ ಪಾಲಿಕೆಯು ಗೊತ್ತುವಳಿಯನ್ನು ಅಂಗೀಕರಿಸತಕ್ಕದ್ದು. ಆನಂತರ ಅದನ್ನು, ಕನಿಷ್ಠ ಎರಡು ವೃತ್ತ ಪತ್ರಿಕೆಗಳಲ್ಲಿ ವಿಶೇಷವಾಗಿ, ಕನ್ನಡ ಪತ್ರಿಕೆಗಳಲ್ಲಿ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಗೆ ಮಾಹಿತಿಗಾಗಿ ಮತ್ತು ಅದು ಪ್ರಕಟವಾದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸತಕ್ಕದ್ದು. ಮೇಲೆ ಹೇಳಿಕ ಅವಧಿಯೊಳಗೆ ಯಾವುವೇ ಆಕ್ಷೇಪಣೆ ಅಥವಾ ಸಲಹೆಗಳು ಬಂದರೆ, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪರಿಶೀಲಿಸುವುದಕ್ಕಾಗಿ ನಗರ ಪಾಲಿಕೆಯ ಮುಂದಿನ ಸಭೆಯಲ್ಲಿ ಅವುಗಳನ್ನು

ಮಂಡಿಸತಕ್ಕದ್ದು. ರಾಜ್ಯ ಸರ್ಕಾರದ ಯಾವುವೇ ನಿರ್ದೇಶನಗಳಿದ್ದರೆ ಅವುಗಳಿಗೆ ಒಳಪಟ್ಟು ಗೊತ್ತುವಳಿಯನ್ನು ಅಂಗೀಕರಿಸಿದ ಮೇಲೆ ಅದರಂತೆ ನಗರ ಪಾಲಿಕೆಯ ಬೀದಿಗೆ ನಾಮಕರಣ ಮಾಡುವುದಕ್ಕೆ ಕ್ರಮ ಕೈಗೊಳ್ಳತಕ್ಕದ್ದು.

9. **ವಿವಾದ.–** ಬಳಕೆಯಲ್ಲಿರುವ ಹೆಸರಿನ ಸಂಬಂಧದಲ್ಲಿ ವಿರೋಧ ವ್ಯಕ್ತಪಡಿಸಿ ಯಾವುದೇ ವಿವಾದ ಉಂಟಾಗುವ ಸಂಭವವಿದ್ದರೆ, ಸದರಿ ಪ್ರಸ್ತಾವವನ್ನು ಆಯುಕ್ತರು, ಈ ಉದ್ದೇಶಕ್ಕಾಗಿ ಪರಿಷತ್ತಿನಿಂದ ರಚಿತವಾಗಿರುವ ಸ್ಥಾಯಿ ಸಮಿತಿಗೆ ಕಳುಹಿಸತಕ್ಕದ್ದು. ಸ್ಥಾಯಿ ಸಮಿತಿಯು, ವಿವಾದಾತ್ಮಕವೆಂದು ಅಥವಾ ಸಾರ್ವಜನಿಕರಿಗೆ ಉಪದ್ರವಕಾರಿಯಾಗಿದೆ ಎಂದು ತಿಳಿದು ಬಂದರೆ, ಸಾರ್ವಜನಿಕ ಸ್ಥಳದ ಹೆಸರನ್ನು ನಿರ್ಧರಿಸುವ ಅಥವಾ ಬದಲಾಯಿಸುವ ಬಗೆಗಿನ ಪ್ರಸ್ತಾವವನ್ನು ಪರಿಶೀಲಿಸತಕ್ಕದ್ದು ಮತ್ತು ಅದು ತಾನು ಸೂಕ್ತವೆಂದು ಭಾವಿಸಬಹುದಾದಂಥ ರೀತಿಯಲ್ಲಿ ಅಂಥ ಹೆಸರುಗಳನ್ನು ಮಾರ್ಪಾಟು ಮಾಡಲು ಅಥವಾ ಬದಲಾಯಿಸಲು ಶಿಫಾರಸು ಮಾಡತಕ್ಕದ್ದು ಮತ್ತು ತನ್ನ ಶಿಫಾರಸ್ಸನ್ನು ಮಾಡತಕ್ಕದ್ದು ಮತ್ತು ತನ್ನ ಶಿಫಾರಸನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

10. **ಬಳಕೆಯಲ್ಲಿರುವ ಹೆಸರಿನ ಬದಲಾವಣೆ.–** ಬಳಕೆಯಲ್ಲಿರುವ ಸಾರ್ವಜನಿಕ ಸ್ಥಳದ ಹೆಸರನ್ನು, ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೇ ಯಾವುದೇ ಸಂದರ್ಭಗಳಲ್ಲಿ ಬದಲಾವಣೆ ಮಾಡತಕ್ಕದ್ದಲ್ಲ. ಬಳಕೆಯಲ್ಲಿರುವ ಹೆಸರು, ಸ್ಥಳೀಯ ಪರಂಪರೆಗೆ ಅಸಂಗತವಾಗಿದೆ ಎಂದು ಅಥವಾ ಸಮರ್ಥನೀಯವಾದ ಕಾರಣವಿದೆ ಎಂದು ಕಂಡು ಬಂದರೆ ಯಾವುವೇ ಅಂಥ ಬದಲಾವಣೆಗಳನ್ನು ದಾಖಲಿಸತಕ್ಕದ್ದು.

11. **ಸರ್ಕಾರದ ಅನುಮೋದನೆ.–** ಸ್ಥಾಯಿ ಸಮಿತಿಯು ಸಲ್ಲಿಸಿದ ಶಿಫಾರಸುಗಳನ್ನು ಪರಿಶೀಲಿಸಿದ ನಂತರ ಸರ್ಕಾರವು, ಆದೇಶದ ಮೂಲಕ ಸಾರ್ವಜನಿಕ ಸ್ಥಳದ ಹೆಸರನ್ನು ಬದಲಾಯಿಸಲು ತನ್ನ ಅನುಮೋದನೆ ನೀಡಬಹುದು ಅಥವಾ ಅದನ್ನು ತಿರಸ್ಕರಿಸಬಹುದು ಅಥವಾ ಕಾರಣಗಳನ್ನು ದಾಖಲಿಸಿ ಪರ್ಯಾಯವಾಗಿ ಹೊಸ ಹೆಸರನ್ನು ಪ್ರಸ್ತಾವಿಸಬಹುದು.

12. **ಅನುಮೋದನೆಯ ನಂತರ ಕ್ರಮಗಳನ್ನು ಆರಂಭಿಸುವುದು.–** ಸಾರ್ವಜನಿಕ ಸ್ಥಳದ ಹೆಸರನ್ನು ಬದಲಾಯಿಸುವುದಕ್ಕಾಗಿ ಸರ್ಕಾರವು ಅನುಮೋದನೆ ನೀಡಿದ ತರುವಾಯ,–

ಎ) ಆಯುಕ್ತರು, ಯಾವುದೇ ಕಟ್ಟಡದ ಎದ್ದು ಕಾಣುವ ಭಾಗದಲ್ಲಿ ಗೋಡೆ, ಫಲಕ ಅಥವಾ ಸ್ಥಳ ಅಥವಾ ಅಂಥ ಬೀದಿಯ ಅತೀ ಹತ್ತಿರದ ಮೂಲೆ ಅಥವಾ ಪ್ರವೇಶ ದ್ವಾರ ಅಥವಾ ಅಂಥ ಬೀದಿಯ ಅನುಕೂಲಕರವಾದ ಸ್ಥಳದಲ್ಲಿ ಅದು ಯಾವ ಹೆಸರಿನಿಂದ ಸಂಖ್ಯೆಯಿಂದ ಕರೆಯಬೇಕೋ ಆ ಹೆಸರು ಅಥವಾ ಸಂಖ್ಯೆಯನ್ನು ಹಾಕಿಸಲು ಅಥವಾ ಬಣ್ಣದಿಂದ ಬರೆಸುವಂತೆ ಮಾಡತಕ್ಕದ್ದು; ಮತ್ತು

ಬಿ) ಯಾವುದೇ ಸಾರ್ವಜನಿಕ ಸ್ಥಳದ ಹೆಸರನ್ನು, ಸೂಕ್ತ ಅಳತೆಯ ಫಲಕಗಳ ಮೇಲೆ ಹಾಕಿಸಲು ಅಥವಾ ಬಣ್ಣದಿಂದ ಬರೆಸುವಂತೆ ಮಾಡತಕ್ಕದ್ದು.

13. **ದಂಡ.–** (1) ಯಾವುದೇ ಸಾರ್ವಜನಿಕ ಸ್ಥಳದ ಅಂಥ ಯಾವುದೇ ಹೆಸರು ಅಥವಾ ಸಂಖ್ಯೆ ಅಥವಾ ಉಪ ಸಂಖ್ಯೆಯನ್ನು ನಾಶಪಡಿಸತಕ್ಕದ್ದಲ್ಲ, ಅಳಿಸಿಹಾಕತಕ್ಕದ್ದಲ್ಲ, ವಿರೂಪಗೊಳಿಸತಕ್ಕದ್ದಲ್ಲ. ಅಥವಾ ಯಾವುದೇ ವಿಧದಲ್ಲಿ ಹಾನಿಗೊಳಿಸತಕ್ಕದ್ದಲ್ಲ, ಬದಲಾಯಿಸತಕ್ಕದ್ದಲ್ಲ, ಅಥವಾ ಆಯುಕ್ತರ ಆದೇಶದ ಮೂಲಕ ಹಾಕಿಸಿದ ಅಥವಾ ಬಣ್ಣದಿಂದ ಬರೆಸಿದ ಹೆಸರನ್ನು ಅಥವಾ ಸಂಖ್ಯೆಯನ್ನು ಅಥವಾ ಉಪ ಸಂಖ್ಯೆಯನ್ನು ಬೇರೆ ರೀತಿಯಲ್ಲಿ ಹಾಕಿಸತಕ್ಕದ್ದಲ್ಲ ಅಥವಾ ಬಣ್ಣದಿಂದ ಬರೆಸತಕ್ಕದ್ದಲ್ಲ.

(2) ಯಾರೇ ವ್ಯಕ್ತಿಯು,–

(i) ನಿಗಮದ ಸಮ್ಮತಿಯಿಲ್ಲದೆ, ಯಾವುದೇ ಭಿತ್ತಿಪತ್ರ, ಬಿಲ್ ಪ್ರಕಟಣೆ ಪತ್ರ, ಅಥವಾ ಇತರ ಪರಿಚಯ ಪತ್ರ ಅಥವಾ ಜಾಹೀರಾತು ಸಾಧನಗಳನ್ನು, ನಾಮಫಲಕಗಳು, ಗೋಡೆ, ಫಲಕಗಳಿಗೆ ಎದುರಾಗಿ ಅಥವಾ ಅವುಗಳ ಮೇಲೆ ಅಂಟಿಸಿದರೆ; ಅಥವಾ

(ii) ಹಿಂದೆ ಹೇಳಲಾದಂತೆ ಸಮ್ಮತಿಯಿಲ್ಲದೆ, ಅಂಥ ಯಾವುದೇ ಕಟ್ಟಡಗಳು, ಗೋಡೆಗಳು, ಫಲಕಗಳು, ಸುತ್ತು ಗೋಡೆಗಳು, ಕಂಬಗಳು, ದೀಪಸ್ತಂಭಗಳು ಅಥವಾ ಅದೇ ರೀತಿಯ ರಚನೆಗಳ ಮೇಲೆ ಸೀಮೆ ಸುಣ್ಣದಿಂದ ಅಥವಾ ಬಣ್ಣದಿಂದ ಅಥವಾ ಇನ್ನಾವುದೇ ರೀತಿಯಲ್ಲಿ ಬರೆದರೆ ವಿರೂಪಗೊಳಿಸಿದರೆ ಅಥವಾ ಗುರುತು ಮಾಡಿದರೆ, ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಮತ್ತು ತರುವಾಯದ ಅಪರಾಧಗಳನ್ನು ಕರ್ನಾಟಕ ಬಹಿರಂಗ ಸ್ಥಳಗಳನ್ನು (ವಿರೂಪಗೊಳಿಸುವುದನ್ನು ತಡೆಗಟ್ಟುವ) ಅಧಿನಿಯಮ, 1981ರ (1982ರ ಕರ್ನಾಟಕ ಅಧಿನಿಯಮ 35) ಅಡಿಯಲ್ಲಿ ಅಧಿವಿಚಾರಣೆ ಮಾಡತಕ್ಕದ್ದು.

